# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | **1212** |
| ಸದಸ್ಯರ ಹೆಸರು | : | ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 07-03-2022 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

***

| | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ವಿದ್ಯುತ್ ನಿಗಮದ ಅಧೀನದಲ್ಲಿರುವ ವಿವಿಧ ರೀತಿಯ ವಿದ್ಯುಚ್ಛಕ್ತಿ ಉತ್ಪಾದಿಸುವ ಉತ್ಪಾದನಾ ಕೇಂದ್ರಗಳೆಷ್ಟು ಮತ್ತು ಈ ಕೇಂದ್ರಗಳು ಕಳೆದ 3 ವರ್ಷಗಳಲ್ಲಿ ಉತ್ಪಾದಿಸಿರುವ ವಿದ್ಯುಚ್ಛಕ್ತಿಯ ಪ್ರಮಾಣವೆಷ್ಟು: (ಉತ್ಪಾದನಾ ಕೇಂದ್ರವಾರು, ವರ್ಷವಾರು ಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಅಧೀನದಲ್ಲಿರುವ ವಿವಿಧ ರೀತಿಯ ವಿದ್ಯುಚ್ಛಕ್ತಿ ಉತ್ಪಾದಿಸುವ ಉತ್ಪಾದನಾ ಕೇಂದ್ರಗಳ ವಿವರಗಳು ಮತ್ತು ಈ ಕೇಂದ್ರಗಳಿಂದ ಕಳೆದ ಮೂರು ವರ್ಷಗಳ ವಿದ್ಯುತ್ ಉತ್ಪಾದನಾ ವಿವರಗಳನ್ನು **ಅನುಬಂಧ-1** ರಲ್ಲಿ ಒದಗಿಸಲಾಗಿದೆ. |
| ಆ) | ಕರ್ನಾಟಕ ವಿದ್ಯುತ್ ನಿಗಮದ ಅಡಿಯಲ್ಲಿ ಈ ವಿವಿಧ ವಿದ್ಯುಚ್ಛಕ್ತಿ ಉತ್ಪಾದನೆ ಕೇಂದ್ರಗಳಲ್ಲಿ ವಿದ್ಯುಚ್ಛಕ್ತಿ ಉತ್ಪಾದನೆ ಸಾಮರ್ಥ್ಯ ಹೆಚ್ಚಿಸಲು ನಿಗಮ ಹಮ್ಮಿಕೊಂಡಿರುವ ಯೋಜನೆಗಳು ಮತ್ತು ಕಾರ್ಯಕ್ರಮಗಳು ಯಾವುವು: ಇವುಗಳ ಅನುಷ್ಠಾನ ಯಾವ ಹಂತದಲ್ಲಿವೆ: ಈ ಯೋಜನೆಗಳ ನವೀಕರಣ ಮತ್ತು ಆಧುನೀಕರಣಗಳಿಗೆ ಕೇಂದ್ರ ಸರ್ಕಾರದಿಂದ ದೊರೆತಿರುವ ಆರ್ಥಿಕ ನೆರವು ಮತ್ತು ಸಹಾಯಧನವೆಷ್ಟು: ಈ ಯೋಜನೆಗಳ ಅನುಷ್ಠಾನದ ಆರ್ಥಿಕ ಮತ್ತು ಭೌತಿಕ ಪ್ರಗತಿ ಒಳಗೊಂಡಂತೆ ಪೂರ್ಣ ಮಾಹಿತಿ ನೀಡುವುದು: | ಕರ್ನಾಟಕ ವಿದ್ಯುತ್ ನಿಗಮದ ವಿದ್ಯುಚ್ಛಕ್ತಿ ಉತ್ಪಾದನೆ ಕೇಂದ್ರಗಳಲ್ಲಿ, ವಿದ್ಯುಚ್ಛಕ್ತಿ ಉತ್ಪಾದನೆ ಸಾಮರ್ಥ್ಯ ಹೆಚ್ಚಿಸುವ ಯೋಜನೆಗಳು ಇರುವುದಿಲ್ಲ (ಪವನ ಶಕ್ತಿ ಹೊರತಾಗಿ) ಆದಾಗ್ಯೂ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಕೈಗೆತ್ತಿಕೊಂಡಿರುವ ನವೀಕರಣ ಮತ್ತು ಆಧುನೀಕರಣಗಳ ಯೋಜನೆಗಳ ವಿವರಗಳನ್ನು **ಅನುಬಂಧ-2** ರಲ್ಲಿ ಒದಗಿಸಲಾಗಿದೆ. |
| ಇ) | ಕರ್ನಾಟಕ ವಿದ್ಯುತ್ ನಿಗಮವು ರಾಜ್ಯದಲ್ಲಿ ಹೆಚ್ಚಿನ ವಿದ್ಯುಚ್ಛಕ್ತಿ ಉತ್ಪಾದನೆಗೆ ಹಮ್ಮಿಕೊಂಡಿರುವ ಹೊಸ ಯೋಜನೆಗಳು ಯಾವುವು: ಈ ಯೋಜನೆಗಳ ಅನುಷ್ಠಾನ ಯಾವ ಹಂತದಲ್ಲಿವೆ: ಮತ್ತು ಈ ಯೋಜನೆಗಳ ಅನುಷ್ಠಾನಕ್ಕೆ ಕೇಂದ್ರ ಸರ್ಕಾರದಿಂದ ದೊರೆತಿರುವ ಆರ್ಥಿಕ ನೆರವು ಮತ್ತು ಸಹಾಯ ಧನವೆಷ್ಟು: ಈ ಯೋಜನೆಗಳ ಅನುಷ್ಠಾನದ ಭೌತಿಕ ಮತ್ತು ಆರ್ಥಿಕ ಪ್ರಗತಿ ಒಳಗೊಂಡಂತೆ ಪೂರ್ಣ ಮಾಹಿತಿ ನೀಡುವುದು: | ಕರ್ನಾಟಕ ವಿದ್ಯುತ್ ನಿಗಮವು ಹೆಚ್ಚಿನ ವಿದ್ಯುಚ್ಛಕ್ತಿ ಉತ್ಪಾದನೆಗೆ ಹಮ್ಮಿಕೊಂಡಿರುವ ಹೊಸ ಯೋಜನೆಗಳ ವಿವರಗಳನ್ನು **ಅನುಬಂಧ-3** ರಲ್ಲಿ ಒದಗಿಸಲಾಗಿದೆ. ಅನುಬಂಧ-3 ರಲ್ಲಿ ನಮೂದಿಸಿರುವ ಯೋಜನೆಗಳಿಗೆ ಕೇಂದ್ರ ಸರ್ಕಾರದ ಆರ್ಥಿಕ ನೆರವು ದೊರೆತಿರುವುದಿಲ್ಲ. |

| | | |
|---|---|---|
| ಈ) | ಕರ್ನಾಟಕ ವಿದ್ಯುತ್ ನಿಗಮ ಪವನಶಕ್ತಿ, ಸೌರಶಕ್ತಿ ಮತ್ತು ಕಿರುಜಲ ವಿದ್ಯುತ್ ಯೋಜನೆಗಳ ಸ್ಥಾಪನೆಗೆ ರಾಜ್ಯದಲ್ಲಿ ಲಭ್ಯವಿರುವ ಅವಕಾಶಗಳನ್ನು ಬಳಸಿಕೊಳ್ಳದಿರುವುದು ಮತ್ತು ಶಾಖೋತ್ಪನ್ನ ಕೇಂದ್ರಗಳಿಗೆ ಅಗತ್ಯವಿರುವ ಕಲ್ಲಿದ್ದಲು ಶೇಖರಣೆ ಮತ್ತು ಮರು ಹಂಚಿಕೆ ನಿರ್ವಹಣೆಯಲ್ಲಿ ವಿಫಲವಾಗಿರುವುದರಿಂದ, ನಿಗಮ ಉದ್ದೇಶಿತ ವಿದ್ಯುಚ್ಛಕ್ತಿ ಉತ್ಪಾದನೆ ಗುರಿ ಸಾಧನೆಯಲ್ಲಿ ಹಿಂದೆ ಬಿದ್ದಿರುವುದು ನಿಜವೇ: (ಕಾರಣಗಳೊಂದಿಗೆ ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ವಿದ್ಯುತ್ ನಿಗಮ ಪವನಶಕ್ತಿ, ಸೌರಶಕ್ತಿ ಮತ್ತು ಕಿರುಜಲ ವಿದ್ಯುತ್ ಯೋಜನೆಗಳ ಸ್ಥಾಪನೆಗೆ ರಾಜ್ಯದಲ್ಲಿ ಲಭ್ಯವಿರುವ ಅವಕಾಶಗಳನ್ನು ಬಳಸಿಕೊಳ್ಳಲು ಮತ್ತು ಶಾಖೋತ್ಪನ್ನ ಕೇಂದ್ರಗಳಿಗೆ ಅಗತ್ಯವಿರುವ ಕಲ್ಲಿದ್ದಲು ಶೇಖರಣೆ ಮತ್ತು ಮರು ಹಂಚಿಕೆ ನಿರ್ವಹಣೆಯಲ್ಲಿ ಕೈಗೊಂಡ ಕ್ರಮಗಳ ವಿವರಗಳನ್ನು **ಅನುಬಂಧ-4** ರಲ್ಲಿ ಒದಗಿಸಲಾಗಿದ. |
| ಉ) | ರಾಜ್ಯ ಸರ್ಕಾರದ ಸ್ವಾಮ್ಯದ ಪವರ್ ಕಂಪನಿ ಆಫ್ ಕರ್ನಾಟಕ ವಿವೇಚನ ರಹಿತವಾಗಿ ಕೇಂದ್ರ ಸರ್ಕಾರದಿಂದ ಸ್ಥಾಪಿಸಲ್ಪಡುವ ವಿದ್ಯುಚ್ಛಕ್ತಿ ಯೋಜನೆಗಳಿಂದ, ಎಂಒಯು ಮಾರ್ಗದ ಮೂಲಕ ಹಾಗೂ ಅಂತರ್ ರಾಜ್ಯ ಮತ್ತು ಪ್ರಸರಣ ವ್ಯವಸ್ಥೆ ಮೂಲಕ ವಿದ್ಯುಚ್ಛಕ್ತಿ ಉತ್ಪಾದನೆಗೆ ಬಂಡವಾಳ ಹೂಡಿದ್ದು ಅಥವಾ ಖರೀದಿ ಒಪ್ಪಂದ ಮಾಡಿಕೊಂಡಿದ್ದು, ಕೇಂದ್ರ ಸರ್ಕಾರದಿಂದ ಸ್ಥಾಪಿಸಲ್ಪಡುವ ಯೋಜನೆಗಳು ಕಾರ್ಯಗತವಾಗದೇ ನೆನೆಗುದಿಗೆ ಬಿದ್ದಿರುವುದು ಮತ್ತು ಖರೀದಿ ಒಪ್ಪಂದಕ್ಕೆ ಒಳಪಟ್ಟ ಸಂಸ್ಥೆಗಳು ನ್ಯಾಯಧೀಕರಣಗಳಲ್ಲಿ ಮತ್ತು ಸರ್ವೋಚ್ಛ ನ್ಯಾಯಾಲಯದಲ್ಲಿ ಕಂಪನಿ ಮತ್ತು ನಿಗಮಗಳ ವಿರುದ್ಧ ಕೇಸು ದಾಖಲಿಸಿ, ಕಂಪನಿ ಮತ್ತು ನಿಗಮಗಳಿಗೆ ಅಪಾರ ಹಾನಿಯಾಗಿರುವುದು ನಿಜವೇ? (ಪ್ರಕರಣಗಳ ಪೂರ್ಣ ವಿವರ ನೀಡುವುದು) | **(ಅ)** ಕರ್ನಾಟಕ ಸರ್ಕಾರವು ವಿದ್ಯುತ್ ಕೊರತೆಯನ್ನು ನೀಗಿಸುವ ಸಲುವಾಗಿ ಕೇಂದ್ರ ವಿದ್ಯುತ್ ಮಂತ್ರಾಲಯದಿಂದ ಆಯೋಜನೆಗೊಂಡ ಯು.ಎಂ.ಪಿ.ಪಿ(Ultra Mega Power Project) ಯೋಜನೆಗಳಿಗೆ ರಾಜ್ಯದ ವಿದ್ಯುತ್ ಹಂಚಿಕೆಗೆ ಅನುಗುಣವಾಗಿ ವಿದ್ಯುತ್ ವಿತರಣಾ ಕಂಪನಿಗಳು ಭೂಸ್ವಾಧೀನ ಮತ್ತು ಬದ್ಧತೆ ಶುಲ್ಕಗಳಿಗೆ ಮುಂಗಡ ಠೇವಣಿಯನ್ನು ಪ್ರಾರಂಭಿಸಲು ಉದ್ದೇಶಿಸಿರುವ ದಿನಾಂಕದಂದು ನೀಡಿರಲಾಗಿರುತ್ತದೆ. ವಿವರಗಳು ಈ ಕೆಳಗಿನಂತಿವೆ: |

(ರೂ.ಕೋಟಿಗಳಲ್ಲಿ)

| **ಕ್ರಮ ಸಂಖ್ಯೆ** | **ಯೋಜನೆಯ ಹೆಸರು** | **ಮುಂಗಡ ಠೇವಣಿ ಮೊತ್ತ** | **ಬಡ್ಡಿ 31.03.2019 ರಂತೆ** | **ಒಟ್ಟು** |
|---|---|---|---|---|
| 1 | ಚೆಯ್ಯೂರ್ ಯು.ಎಂ.ಪಿ.ಪಿ | 24.71 | 8.77 | 33.48 |
| 2 | ಬಿಹಾರ್ ಯು.ಎಂ.ಪಿ.ಪಿ | 4.00 | 0.65 | 4.65 |
| 3 | ಡಿಯೋಗರ್ ಯುಎಂಪಿಪಿ | 3.00 | 0.63 | 3.63 |
| 4 | ಒರಿಸ್ಸಾ ಆಡಿಷನಲ್-1 ಯು.ಎಂಪಿಪಿ. (ಗಹೋರೂಪಲ್ಲಿ) | 3.50 | 2.65 | 6.15 |
| 5 | ಮುಂಗೆ ಯು.ಎಂಪಿಪಿ ಮಹಾರಾಷ್ಟ್ರ | 5.00 | 4.0 | 9.0 |
| 6 | ತಾತಿಯಾ ಯುಎಂಪಿಪಿ ಆಂಧ್ರಪ್ರದೇಶ | 1.15 | 0.24 | 1.39 |
| **ಒಟ್ಟು** | | **41.36** | **16.94** | **58.30** |

ತದನಂತರದಲ್ಲಿ, ಸ್ವಚ್ಛ ಮತ್ತು ಹಸಿರು ಯೋಜನೆಗಳಿಂದ ವಿದ್ಯುತ್ ಉತ್ಪಾದನೆ ರಾಜ್ಯ ಸಸರ್ಕಾರದ ಮತ್ತು ಕೇಂದ್ರ ಸರ್ಕಾರವು ಹೆಚ್ಚಿನ ಆದ್ಯತೆಯನ್ನು ನೀಡಿದ್ದು ಈ ನವೀಕರಿಸಬಹುದಾದ ವಿದ್ಯುತ್ ಯೋಜನೆಗಳಿಂದ ರಾಜ್ಯ ಸರ್ಕಾರವು ಹೆಚ್ಚಿನ ವಿದ್ಯುತ್‌ನ್ನು ಪಡೆಯುತ್ತಿರುತ್ತದೆ. ಹಾಗಾಗಿ ರಾಜ್ಯವು ಹೆಚ್ಚುವರಿ ವಿದ್ಯುತ್ತನ್ನು ಹೊಂದಿರುತ್ತದೆ.

ಈ ಮೇಲಿನ ಕಾರಣಗಳಿಂದ ಅಕ್ಟೋಬರ್ 2019ರಲ್ಲಿ ಯು.ಎಂ.ಪಿ.ಪಿ ಯೋಜನೆಗಳಿಂದ ನಿರ್ಗಮಿಸಲು ಸೂಚಿಸಲಾಯಿತು.

ಪಿ.ಸಿ.ಕೆ.ಎಲ್ ನ ಪತ್ರ ದಿನಾಂಕ: 05.05.2020, 15.05.2020, 15.09.2020 ಮತ್ತು 22.03.2021 ರಲ್ಲಿ ಯು.ಎಂ.ಪಿ.ಪಿ ಯೋಜನೆಗಳಿಂದ ನಿರ್ಗಮಿಸುವ ಬಗ್ಗೆ ಕರ್ನಾಟಕ ಸರ್ಕಾರದ ನಿರ್ಧಾರವನ್ನು ತಿಳಿಸಿ ಈ ಯೋಜನೆಗಳಿಗೆ ನೀಡಿರುವ ಠೇವಣಿ ಮೊತ್ತ, ಬದ್ಧತೆ ಶುಲ್ಕಗಳು, ಭೂ ಸ್ವಾಧೀನ ಶುಲ್ಕಗಳನ್ನು ಹಾಗೂ ಬಡ್ಡಿಯನ್ನು ಮರುಪಾವತಿಸಲು ವಿನಂತಿಸಲಾಗಿದೆ.

ಈ ವಿಷಯವಾಗಿ, ಪಿ.ಎಫ್.ಸಿ., ಚೆಯ್ಯೂರು ಮಂಡಳಿಯ ಸಭೆಯಲ್ಲಿ ಪಿ.ಸಿ.ಕೆ.ಎಲ್ ಮೇಲಿನ ಶುಲ್ಕಗಳನ್ನು ಮರುಪಾವತಿಸುವ ಬಗ್ಗೆ ಚರ್ಚಿಸಲಾಗಿದ್ದು ಪ್ರತ್ಯೇಕ ಸಭೆಯನ್ನು ಕರೆಯಲು ನಿರ್ಧರಿಸಲಾಯಿತು.

ಮೇಲಿನ ಮೊತ್ತದ ಮರುಪಾವತಿಯು ಎಸ್ಕಾಂಗಳ ಆರ್ಥಿಕ ಹೊರೆಯನ್ನು ಸ್ವಲ್ಪ ಮಟ್ಟಿಗೆ ಕಡಿಮೆ ಮಾಡುತ್ತದೆ.

**(ಆ)**. 6X660 ಮೆ.ವ್ಯಾ ಸಾಮರ್ಥ್ಯದ ಕೃಷ್ಣ ಪಟ್ಟಣಂ ಯು.ಎಂ.ಪಿ.ಪಿ ಶಾಖೋತ್ಪನ್ನ ವಿದ್ಯುತ್ ಉತ್ಪಾದನಾ ಯೋಜನೆಯನ್ನು 2007ರಲ್ಲಿ ಸ್ಪರ್ಧಾತ್ಮಕ ಟೆಂಡರ್ ಪ್ರಕ್ರಿಯೆಯಲ್ಲಿ ರಿಲೈಯನ್ಸ್ ಪವರ್ ಸಂಸ್ಥೆಗೆ ಕೊಡಲಾಗಿತ್ತು. ಇದರಲ್ಲಿ ಕರ್ನಾಟಕದ ಪಾಲು ಶೇ.20ರಷ್ಟು ಅಂದರೆ 792 ಮೆ.ವ್ಯಾ.

ರಿಲೈಯನ್ಸ್ ಪವರ್ ಸಂಸ್ಥೆಯ ಅಂಗ ಸಂಸ್ಥೆಯಾದ ಕೋಸ್ಟಲ್ ಆಂಧ್ರ ಪವರ್ ಲಿಮಿಟೆಡ್ (CAPL) ರವರನ್ನು ವಿಶೇಷ ಉದ್ದೇಶಿತ ವಾಹನ (SPV) ವನ್ನಾಗಿ ಮಾಡಿದ್ದು ಇವರೊಂದಿಗೆ ಆಂಧ್ರಪ್ರದೇಶ, ತಮಿಳುನಾಡು, ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳ ವಿದ್ಯುತ್ ವಿತರಣಾ ಕಂಪನಿಗಳು ವಿದ್ಯುತ್‌ಖರೀದಿ ಒಪ್ಪಂದವನ್ನು ದಿನಾಂಕ: 23.03.2007 ರಂದು ಮಾಡಿಕೊಂಡಿದ್ದವು.

| | | |
|---|---|---|
| | | ಇಂಡೋನೇಷಿಯಾದಲ್ಲಿ ಕಲ್ಲಿದ್ದಲು ಮಾರುಕಟ್ಟೆಯಲ್ಲಿ ದರಗಳ ನಿಯಮಗಳು ಬದಲಾವಣೆಯಿಂದಾಗಿ ಈ ಯೋಜನೆ ಕಾರ್ಯಗತಗೊಂಡಿರುವುದಿಲ್ಲ. ಈ ಬದಲಾಣೆಯಿಂದ ದರ ವ್ಯತ್ಯಾಸವಾಗಿರುವುದರಿಂದ CAPL ರವರು ಈ ಸಂಬಂಧ ಪರಿಹಾರಕ್ಕಾಗಿ CERC, APTEL ಮತ್ತು ದೆಹಲಿ ಹೈಕೋರ್ಟ್‌ಗಳಲ್ಲಿ ದಾವೆ ಹೂಡಿದ್ದು, ದೆಹಲಿ ಹೈಕೋರ್ಟ್ ಈ ಪ್ರಕರಣವನ್ನು ವಜಾಗೊಳಿಸಿ ಸದರಿ ಪ್ರಕರಣದ ಇತ್ಯರ್ಥಕ್ಕೆ CAPL ರವರಿಗೆ CERC ಯನ್ನು ಸಂಪರ್ಕಿಸಲು ಆದೇಶಿಸಲಾಗಿತ್ತು. ಈ ಯೋಜನೆಯು ಎಲ್ಲಾ ಪಾಲುದಾರರು CAPL ನಿಂದ ಪಡೆದಿದ್ದ ಬ್ಯಾಂಕ್ ಗ್ಯಾರಂಟಿಯ ಒಟ್ಟು ಮೊತ್ತ ರೂ.300 ಕೋಟಿಯಷ್ಟನ್ನು (ಕರ್ನಾಟಕದ ವಿದ್ಯುತ್ ವಿತರಣಾ ಕಂಪನಿಗಳಿಂದ ರೂ.60 ಕೋಟಿಗಳು – ಶೇ.20 ರಷ್ಟು) ನಗದೀಕರಿಸಲಾಗಿರುತ್ತದೆ. ಪ್ರಸ್ತುತ CAPLರವರು ಸದರಿ ಯೋಜನೆಗಳನ್ನು ಹೊಂದಿರುವ ಭೂಮಿಯನ್ನು ಮಾರಾಟ ಮಾಡಲು ಅಥವಾ ತಾವೇ ಬಳಸಿ ಕೊಳ್ಳಲು ಅನುಮತಿ ಕೋರಿ ದೆಹಲಿ ಹೈಕೋರ್ಟ್‌ನಲ್ಲಿ ಪ್ರಕರಣ ಸಂಖ್ಯೆ WP(C)No.9062/2019 ದಾಖಲಿಸಿರುತ್ತಾರೆ. ಸದರಿ ಪ್ರಕರಣ ಬಾಕಿ ಇರುತ್ತದೆ. |

ಸಂಖ್ಯೆ: ಎನರ್ಜಿ 42 ಇಬಿಎಸ್ 2022

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು

## ಅನುಬಂಧ-1

ಕವಿನಿನಿಯ ವಿವಿದ ವಿದ್ಯುತ್ ಕೇಂದ್ರಗಳು ಮತ್ತು ಕಳೆದ 3 ವರ್ಷಗಳ ವಿದ್ಯುತ್ ಉತ್ಪಾದನೆಯ ವಿವರ ಕೆಳಕಂಡಂತ್ತಿವೆ:

ದ.ಲ.ಯೂಗಳಲ್ಲಿ

| ಕ್ರಮ ಸಂಖ್ಯೆ | ವಿದ್ಯುದಾಗಾರಗಳು | ಉತ್ಪಾದನಾ ಸಾಮರ್ಥ್ಯ ಮೆ.ವ್ಯಾ.ಗಳಲ್ಲಿ | ನಿಜ ಉತ್ಪಾದನೆ 2018–19 | ನಿಜ ಉತ್ಪಾದನೆ 2019–20 | ನಿಜ ಉತ್ಪಾದನೆ 2020–21 | ನಿಜ ಉತ್ಪಾದನೆ 2021–22 (01.04.2021ರಿಂದ 10.02.2022 ರವರಗೆ) |
|---|---|---|---|---|---|---|
| 1 | ಶರಾವತಿ | 1035 | 4774.69 | 5130.37 | 4583.24 | 4105.95 |
| 2 | ಲಿಂಗನಮಕ್ಕಿ | 55 | 249.36 | 294.92 | 253.76 | 227.33 |
| 3 | ಬದ್ರಾ | 39.20 | 59.90 | 73.54 | 55.53 | 57.84 |
| 4 | ನಾಗಝರಿ | 900 | 2771.54 | 3662.15 | 3147.19 | 3022.43 |
| 5 | ಸೂಪ | 100 | 593.51 | 581.20 | 444.08 | 504.83 |
| 6 | ವರಾಹಿ | 460 | 1243.76 | 1183.64 | 1093.11 | 928.60 |
| 7 | ಮಾಣಿ | 9 | 37.40 | 30.13 | 23.88 | 16.79 |
| 8 | ಘಟಪ್ರಭಾ | 32 | 80.63 | 50.59 | 109.41 | 81.65 |
| 9 | ಕದ್ರಾ | 150 | 370.34 | 470.64 | 405.29 | 346.56 |
| 10 | ಕೊಡಸಳ್ಳಿ | 120 | 338.40 | 469.30 | 379.35 | 353.37 |
| 11 | ಗೇರುಸೊಪ್ಪ | 240 | 524.67 | 571.57 | 476.42 | 453.65 |
| 12 | ಆಲಮಟ್ಟಿ | 290 | 408.37 | 631.50 | 643.69 | 454.85 |
| 13 | ಶಿವನ ಸಮುದ್ರಂ | 42 | 219.01 | 203.24 | 255.50 | 223.80 |
| 14 | ಶಿಂಷಾಪುರ | 17.20 | 72.05 | 58.17 | 60.99 | 39.05 |
| 15 | ಎಮ್‌ಜಿಹೆಚ್‌ಇ | 139.20 | 192.82 | 295.36 | 368.88 | 466.65 |
| 16 | ಮಲ್ಲಾಪುರ | 9 | 9.06 | 0 | 0 | 32.75 |
| 17 | ಸಿರ್‌ವಾರ | 1 | 0 | 0 | 0 | 0 |
| 18 | ಕಲ್ಮಲ | 0.40 | 0 | 0 | 0 | 0 |
| 19 | ಗಾಣೇಕಲ್ | 0.35 | 0 | 0 | 0 | 0 |
| 20 | ಮಲಪ್ರಭಾ | 2.40 | 0.716 | 3.53 | 2.145 | 3.308 |
| 21 | ಮುನಿರಾಬಾದ್ | 38 | 90.82 | 97.03 | 103.25 | 116.94 |
| | ಒಟ್ಟು (ಜಲ ವಿದ್ಯುತ್) | **3679.75** | **12037.08** | **13806.91** | **12405.77** | **11436.38** |
| 22 | ಆರ್‌ಟಿಪಿಎಸ್ ಘಟಕ–1–8 | 1720 | **8917.97** | 8533.95 | 3927.87 | 5645.65 |
| 23 | ಬಿಟಿಪಿಎಸ್ ಘಟಕ–1–3 | 1700 | 4059.05 | 4050.36 | 3094.63 | 5683.93 |
| 24 | ವೈಟಿಪಿಎಸ್ | 1600 | 791.66 | 467.03 | 3381.62 | 4433.15 |
| | ಒಟ್ಟು (ಶಾಖೋತ್ಪನ್ನ) | **5020** | **13768.69** | **13051.35** | **10404.12** | **15762.73** |
| 25 | ಕಪ್ಪದಗುಡ್ಡ ( ಪವನ) | 4.555 | 5.25 | 7.52 | 7.75 | 6.75 |
| 26 | ಸೌರಶಕ್ತಿ –ಕೋಲಾರ, ಬೆಳಗಾಂ, ಯಪಾಲ್‌ದಿನ್ನಿ, ಬಳಕವಾಡಿ,ಶಿವನಸಮುದ್ರಂ, ಚಂದಾಪುರ | 34 | 43.14 | 43.23 | 42.38 | 32.11 |
| | ಒಟ್ಟು | **8738.305** | **25854.17** | **26909.01** | **22860.01** | **27237.97** |

ಅನುಬಂಧ–2

## ಕ.ವಿ.ನಿ.ನಿ ಯ ವಿವಿದ ಯೋಜನೆಗಳ ನವೀಕರಣ ಹಾಗೂ ಆಧುನೀಕರಣ ಕೆಲಸಗಳ ಮಾಹಿತಿ

### 1) ರಾ.ಶಾ.ವಿ. ಕೇಂದ್ರದ ಘಟಕಗಳ ಬಿ.ಟಿ.ಜಿ ಪ್ಯಾಕೇಜ್:

| ಕ್ರ ಸಂ. | ಕೆಲಸಗಳ ವಿವರಣೆ | ಯೋಜನಾ ಪ್ರದೇಶ | ವರ್ಷ | ಮೊತ್ತ (ಕೋಟಿ ರೂ) | ಪ್ರಸ್ತುತ ಸ್ಥಿತಿ | ಕೇಂದ್ರ ಸರ್ಕಾರದಿಂದ ಆರ್ಥಿಕ ನೆರವು |
|---|---|---|---|---|---|---|
| 1 | ದಕ್ಷತೆಯ ಉನ್ನತೀಕರಣಕ್ಕಾಗಿ ಟರ್ಬೈನ್ ಮಾಡ್ಯೂಲ್‌ಗಳ ನವೀಕರಣ ಮತ್ತು ಆಧುನೀಕರಣ– ಘಟಕ–3 | ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರ | 2022–23 | 120.00 | ಟೆಂಡರ್ ಮೌಲ್ಯಮಾಪನ ಪ್ರಗತಿಯಲ್ಲಿದೆ | ಇಲ್ಲ |
| 2 | 210 ಮೆ.ವ್ಯಾ. ಹೆಚ್‌ಪಿ ಟರ್ಬೈನ್ ಮಾಡ್ಯೂಲ್‌ಗಳ ದುರಸ್ತಿ ಮತ್ತು ನವೀಕರಣ (ಇನ್ನರ್ ಕೇಸಿಂಗ್ ಮತ್ತು ರೋಟರ್) ಘಟಕ–2 | | 2022–23 | 7.65 | ಕಾಮಗಾರಿ ಪ್ರಗತಿಯಲ್ಲಿದೆ | ಇಲ್ಲ |
| 3 | ಘಟಕಗಳ ಕೇಂದ್ರೀಕೃತ ಚಾಲನೆ ಹಾಗೂ ಘಟಕ 4, 5, 6 ಮತ್ತು 7 ಸಿ&ಐ (C&I) ಸಿಸ್ಟಂಗಳ ನವೀಕರಣ ಹಾಗೂ ಆಧುನೀಕರಣ | | 2022–24 | 100.00 | ಟೆಂಡರ್ ಕರೆಯಲಾಗಿದೆ | ಇಲ್ಲ |
| 4 | 18 ಸಂಖ್ಯೆಗಳ ವಾಲ್ಯೂಮೆಟ್ರಿಕ್ ಕಲ್ಲಿದ್ದಲು ಗಿರಣಿ ಫೀಡರ್‌ನಿಂದ ಗ್ರಾವಿಮೆಟ್ರಿಕ್ ಕಲ್ಲಿದ್ದಲು ಗಿರಣಿ ಫೀಡರ್ ನಿಯಂತ್ರಣ ವ್ಯವಸ್ಥೆಯ ಪರಿವರ್ತನೆ ಮತ್ತು ಉನ್ನತೀಕರಣ –ಘಟಕ–5,6 & 7 | | 2022–23 | 4.22 | ಕಾಮಗಾರಿ ಪ್ರಗತಿಯಲ್ಲಿದೆ | ಇಲ್ಲ |

### 2) ಪವನ ವಿದ್ಯುತ್ ಯೋಜನೆ:

ಗದಗ ಜಿಲ್ಲೆಯ ಕಪ್ಪತಗುಡ್ಡ ಪ್ರದೇಶದಲ್ಲಿ 1994–95ರ ಸಾಲಿನಲ್ಲಿ 225kW ಸಾಮರ್ಥ್ಯದ 9 ಪವನ ವಿದ್ಯುತ್ ಘಟಕಗಳನ್ನು ಮೊದಲನೇ ಹಂತದಲ್ಲಿ (Stage-I) ಸ್ಥಾಪಿಸಲಾಗಿರುತ್ತದೆ. ಈ ಘಟಕಗಳ ಜೀವಿತಾವಧಿಯು ಮುಗಿದಿರುವುದರಿಂದ ಇವುಗಳನ್ನು ತೆಗೆದು(Dismantling) ಅದೇ ಜಾಗದಲ್ಲಿ ಹೆಚ್ಚಿನ ಸಾಮರ್ಥ್ಯದ ಘಟಕಗಳನ್ನು(2.1MW x 4ಸಂಖ್ಯೆ) ಅನುಷ್ಠಾನ ಗೊಳಿಸಿ ಯೋಜನೆಯ ಸಾಮರ್ಥ್ಯ ವನ್ನು 2.025MW ದಿಂದ 8.4 MWಗೆ ಹೆಚ್ಚಿಸಲು (Enhancing Capacity from 2.025MW to 8.4MW of First Stage Machines) ನಿಗಮವು ಉದ್ದೇಶಿಸಿರುತ್ತದೆ.

ಕರ್ನಾಟಕ ಸರ್ಕಾರದಿಂದ RE Policy 2021-26 ಅನುಮೋದನೆ ಹಂತದಲ್ಲಿದ್ದು ಈ ನೀತಿಯ ಅನ್ವಯ ಯೋಜನೆಯನ್ನು ತೆಗೆದುಕೊಳ್ಳಲಾಗುವುದು.

### 3) ಜಲ ವಿದ್ಯುತ್ ಯೋಜನೆಗಳು:

| S.No | Name of the work | Order details | Order value | Physical progress of the work | Financial progress | Financial Assistance received from Central Govt. |
|---|---|---|---|---|---|---|
| 1 | Renovation & Modernization works of Shivanasamudram HEP(6X3MW + 4X6MW) | Detailed Order No. LOT/Shivasamudram/ R&M/4208 dtd.31.01.2019 awarded to M/s Andritz Hydro Pvt Ltd | Rs.114.7515 crores excluding taxes | 1. Model test & CFD analysis procedure is approved.<br>2.Drawings/Design documents submitted by the firm is under review. | Advance amount of Rs.11,14,19, 400/- | NIL |

| | | | | | | |
|---|---|---|---|---|---|---|
| 2 | Renovation &Modernization works of NPH – 1,2&3 units | Detailed Order No. LOT/NPH/R&M/3780 dated 24.02.2018 awarded to M/s Bharat Heavy Electricals Ltd | Rs.99.25 crores excluding taxes | The firm has supplied materials worth around 60 crores. The proposal of the firm to resolve the vibration issues is under review. | Advance amount of Rs.1030.6 Lakhs was paid to M/s BHEL | NIL |
| 3 | R&M of 2 x12MW River bed generating units of Bhadra Hydro Electric Project – Supply & Erection | P.O No. - LOT/BHADRA/RBU/ R&M/SUPPLY/1451 and 1452 Date: 31.08.2012 LOT/BHADRA/RBU/ R&M/ERECTION/14 52 and 1452 Date: 31.08.2012 | Rs.17,32,73,8 51/- | Unit-2 was synchronized to the grid on 18.02.2016. Unit-1 was synchronized to the grid on 25.07.2018 and performance guarantee tests were completed. | | MNRE sanctioned amount Rs 6.81 Crores. MNRE released amount Rs 6.13 Crores MNRE amount yet to be released Rs 0.68Crores |
| 4 | Renovation and Modernization(R & M) of switchyard equipments & protection systems of 220/ 400kV substations of KPCL | LOA No.CEED/EE8/R&M/ ODY Equipments/17 dated:05.04.2021 awarded to M/s Hitachi Energy India Ltd. | Rs. 18,70,30,000/- | All major equipments received except CTs at sites. Erection, testing & commissioing work yet to be taken up. | An amount of Rs.3,09,80,6 20/- is paid to M/s Hitachi Energy india pvt.ltd., till date | Approved Grant fromPSDF/NLD C is Rs.87.44 Crores.<br><br>Total amount of Rs. 21.18Crores is received from PSDF/NLDC till date. |
| | | LOA No. LOT/Kadra/ Kodasalli/ADPH/R& M/Prot/011 dated:03.04.2021 to M/s Hitachi Energy India Ltd. | Rs. 4,31,95,139/ | All equipments received at sites. Erection, testing & commissioing work yet to be taken up. | An amount of RS.2,40,25,9 10.00/- is paid to M/s Hitachi Energy india pvt.ltd. | |
| | | Detailed Work Order No. CEED/EE6/ NPH/Line Prot/87 dated:23.04.2021 awarded to M/s GE T&D india ltd. | Rs.35,47,498/ | All equipments received at site. Erection, testing & commissioing work yet to be taken up. | NIL | |
| | | LOA No.BENGALURU/CE (TD)/ JO/12541 dated:11.06.2021 awarded to M/s GE T&D india ltd. | Rs.42,74,92,9 30/- | Supply of equipments is in progress. | NIL | |
| | | LOA No.BENGALURU/ CE(TD)/JO/12501 dated:09.06.2021 awarded to M/s GE T&D india ltd. | Rs. 2,98,48,800/- | upply of equipments is in progress. | NIL | |

**ಅನುಬಂಧ-3**

ಕರ್ನಾಟಕ ವಿದ್ಯುತ್ ನಿಗಮವು ಹೆಚ್ಚಿನ ವಿದ್ಯುಚ್ಛಕ್ತಿ ಉತ್ಪಾದನೆಗೆ ಹಮ್ಮಿಕೊಂಡಿರುವ ಹೊಸ ಯೋಜನೆಗಳ ವಿವರಗಳು:

1) **ಬಿಡದಿಯ 11.5ಮೆ.ವ್ಯಾ. ಘನತ್ಯಾಜ್ಯ ವಿದ್ಯುತ್ ಯೋಜನೆ:** ಕ.ವಿ.ನಿ.ನಿಯು ರಾಮನಗರ ಜಿಲ್ಲೆಯ ಬಿಡದಿಯಲ್ಲಿ 11.5ಮೆ.ವ್ಯಾ. ಸಾಮರ್ಥ್ಯದ ಘನತ್ಯಾಜ್ಯದಿಂದ ವಿದ್ಯುತ್ ಉತ್ಪಾದನಾ ಯೋಜನೆಯನ್ನು ಬಿಬಿಎಂಪಿರವರ ಸಹಯೋಗ ದೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯನ್ನು ಸ್ಥಾಪಿಸಲು ತಗಲುವ ವೆಚ್ಚವನ್ನು 50:50 ರ ಅನುಪಾತದಲ್ಲಿ ಕವಿನಿನಿ ಹಾಗೂ ಬಿಬಿಎಂಪಿ ಭರಿಸುವುದು.

   ಈ ಯೋಜನೆಯು ನಿರ್ಮಾಣ ಹಂತದಲ್ಲಿದ್ದು ಈ ಉದ್ದೇಶಿತ ಯೋಜನೆಯ ನಿರ್ಮಾಣಕ್ಕಾಗಿ ಬಿಬಿಎಂಪಿರವರು ಈ ವರೆಗೆ ರೂ.10.00ಕೋಟಿ ಧನಸಹಾಯವನ್ನು ನೀಡಿರುತ್ತಾರೆ.
   ಮೆ॥ ಇಸ್ಜೆಕ್ ಹೆವಿ ಇಂಜಿನಿಯರಿಂಗ್ ಕಂಪನಿ ಹಾಗು ಮೆ॥ ಹಿಟಾಚಿ ಜೋಸೆನ್ ಇಂಡಿಯಾ ಲಿ. ರವರಿಗೆ ದಿ.08.10.2020 ರಂದು ರೂ.240.00ಕೋಟಿ ಮೊತ್ತದ ಇ.ಪಿ.ಸಿ ಕೆಲಸಕ್ಕೆ ಕಾರ್ಯಾದೇಶ ನೀಡಲಾಗಿದ್ದು 24 ತಿಂಗಳ ಕಾಲಾವಧಿಯನ್ನು ನಿಗದಿ ಪಡಿಸಲಾಗಿದೆ. ಈ ಯೋಜನೆಯ ಪೂರ್ಣಗೊಳಿಸುವ ಅವಧಿಯು 08.10.2022ಆಗಿರುತ್ತದೆ.

   ಸಿವಿಲ್ ಮತ್ತು ಯಾಂತ್ರಿಕ ಕಾಮಗಾರಿಗಳಾದ ತ್ಯಾಜ್ಯ ಶೇಖರಣಾ ಗುಂಡಿ, ಬಾಯ್ಲರ್, ಟಿಜಿ, ಎಫ್.ಜಿ.ಟಿ, ಎಸಿಸಿ, ಡಿಎಂ ವಾಟರ್ ಟ್ಯಾಂಕ್, ಕಂಪ್ರೆಸ್ಸರ್ ಕೊಠಡಿಯ ಕಾಮಗಾರಿ ಕೆಲಸ ಪ್ರಗತಿಯಲ್ಲಿದೆ. ಯಂತ್ರೋಪಕರಣಗಳ ಸರಬರಾಜು ಪ್ರಗತಿಯಲ್ಲಿರುತ್ತದೆ.
   ಭೌತಿಕ ಪ್ರಗತಿ: 41.04%
   ಆರ್ಥಿಕ ಪ್ರಗತಿ: 15.03%

   ಕರ್ನಾಟಕದಲ್ಲಿ ಈ ಕೆಳಗಿನ ಪ್ರದೇಶಗಳಲ್ಲಿ ಘನತ್ಯಾಜ್ಯದಿಂದ ವಿದ್ಯುತ್ ಉತ್ಪಾದನಾ ಕೇಂದ್ರಗಳನ್ನು ಅನುಷ್ಠಾನಗೊಳಿಸಲು ಪ್ರಸ್ತಾಪಿಸಲಾಗಿದೆ:

   - ಬಿಬಿಎಂಪಿ ವ್ಯಾಪ್ತಿಯ ಮಾವಳ್ಳಿಪುರ ಹಾಗು ಕೆಸಿಡಿಸಿ ತ್ಯಾಜ್ಯ ಸಂಸ್ಕರಣಾ ಘಟಕದ ಪ್ರದೇಶದಲ್ಲಿ
   - ಪಚ್ಚನಾಡಿ, ಮಂಗಳೂರು
   - ಮೈಸೂರು
   - ಹುಬ್ಬಳ್ಳಿ-ಧಾರವಾಡ/ ಬೆಳಗಾವಿ
   - ಕಲಬುರ್ಗಿ

2) **ಸೌರ ವಿದ್ಯುತ್ ಯೋಜನೆಗಳು:**

   - 1.15 ಮೆ.ವ್ಯಾ. ಸಾಮರ್ಥ್ಯ ತೇಲುವ ಸೌರ ವಿದ್ಯುತ್ ಯೋಜನೆ ಯಲಹಂಕ ಸಂಯೋಜಿತ ಅನಿಲ ವಿದ್ಯುತ್ ಘಟಕದ ಕಚ್ಚಾ ನೀರಿನ ಕೊಳದ ಮೇಲೆ
     ಟೆಂಡರ್ ಪ್ರಕ್ರಿಯೆಯು ಪ್ರಗತಿಯಲ್ಲಿದೆ.
   - ಕದ್ರಾ ಅಣೆಕಟ್ಟಿನಲ್ಲಿ 20 ಮೆ.ವ್ಯಾ. ಸಾಮರ್ಥ್ಯ ತೇಲುವ ಸೌರ ವಿದ್ಯುತ್ ಯೋಜನೆ.
     ಯೊಜನಾ ವರದಿ ತಯಾರಿಕೆ ಪ್ರಗತಿಯಲ್ಲಿದೆ.
   - ಯಲಹಂಕ ಸಂಯೋಜಿತ ಅನಿಲ ವಿದ್ಯುತ್ ಘಟಕದ ಕಟ್ಟಡಗಳ ಮೇಲೆ 1 ಮೆ.ವ್ಯಾ. ಸಾಮರ್ಥ್ಯ ಸೌರ ಮೇಲ್ಛಾವಣಿ ವಿದ್ಯುತ್ ಯೋಜನೆ.
     ಟೆಂಡರ್ ಪ್ರಕ್ರಿಯೆಯು ಪ್ರಗತಿಯಲ್ಲಿದೆ

...2

**3) ಪಂಪ್ಡ್ ಸ್ಟೋರೇಜ್ ಯೋಜನೆಗಳು:**

- 2000 ಮೆ.ವ್ಯಾ. ಸಾಮರ್ಥ್ಯದ ಶರಾವತಿ ಪಂಪ್ಡ್ ಸ್ಟೋರೇಜ್ ಯೋಜನೆ ವಿಸ್ತೃತ ಯೋಜನಾ ವರದಿ (ಡಿಪಿಆರ್) ಪೂರ್ಣಗೊಂಡಿರುತ್ತದೆ

- 1500 ಮೆ.ವ್ಯಾ. ಸಾಮರ್ಥ್ಯದ ಕಾಗಿನಹರೆ ಪಂಪ್ಡ್ ಸ್ಟೋರೇಜ್ ಯೋಜನೆ (ನೇತ್ರಾವತಿ ನದಿ) ಪೂರ್ವ ಸಾಧ್ಯತಾ ವರದಿಯು (Pre-Feasibility Report) ಪೂರ್ಣಗೊಂಡಿರುತ್ತದೆ.

ಈ ಯೋಜನೆಗಳು ಅನುಷ್ಠಾನಕ್ಕೆ ಬಂದಿಲ್ಲದೆ ಇರುವುದರಿಂದ ಕೇಂದ್ರ ಸರ್ಕಾರದಿಂದ ಯಾವುದೇ ಆರ್ಥಿಕ ನೆರವು ಪಡೆದಿರುವುದಿಲ್ಲ ಮತ್ತು ಈ ಯೋಜನೆಗಳ ಕಾಮಗಾರಿಯನ್ನು ಕೈಗೆತ್ತಿಕೊಂಡಿರುವುದಿಲ್ಲ.

## ಅನುಬಂಧ-4

ಕರ್ನಾಟಕ ವಿದ್ಯುತ್ ನಿಗಮ ಪವನಶಕ್ತಿ, ಸೌರಶಕ್ತಿ ಮತ್ತು ಕಿರು-ಜಲವಿದ್ಯುತ್ ಯೋಜನೆಗಳ ಸ್ಥಾಪನೆಗೆ ರಾಜ್ಯದಲ್ಲಿ ಲಭ್ಯವಿರುವ ಅವಕಾಶಗಳನ್ನು ಬಳಸಿಕೊಳ್ಳಲು ಮತ್ತು ಶಾಖೋತ್ಪನ್ನ ಕೇಂದ್ರಗಳಿಗೆ ಅಗತ್ಯವಿರುವ ಕಲ್ಲಿದ್ದಲು ಶೇಖರಣೆ ಮತ್ತು ಮರು ಹಂಚಿಕೆ ನಿರ್ವಹಣೆಯಲ್ಲಿ ಕೈಗೊಂಡ ಕ್ರಮಗಳು:

**1) ಸೌರ ವಿದ್ಯುತ್ ಯೋಜನೆ**

ಪಾವಗಡ ಸೋಲಾರ್ ಪಾರ್ಕನಲ್ಲಿ 400 ಮೆ.ವ್ಯಾ. ಸಾಮರ್ಥ್ಯ ಸೌರ ವಿದ್ಯುತ್ ಯೋಜನೆಯನ್ನು ನಿಗಮಕ್ಕೆ ನೇರವಾಗಿ ಹಂಚಿಕೆ ಮಾಡಲು ಸರ್ಕಾರಕ್ಕೆ ದಿ.25.01.2016ರ ಪತ್ರದಲ್ಲಿ ಕೋರಲಾಗಿತ್ತು. ಆದರೆ ಸರ್ಕಾರದಿಂದ ಹಂಚಿಕೆಯಾಗಿರುವುದಿಲ್ಲ.

2016 ಸಾಲಿನಲ್ಲಿ, ಕೇಂದ್ರ ಸರ್ಕಾರದ ಸೋಲಾರ್ ಎನರ್ಜಿ ಕಾರ್ಪೋರೇಶನ್ ಆಫ್ ಇಂಡಿಯಾದ P2B3T5 ಟೆಂಡರನಲ್ಲಿ ನಿಗಮದ ವತಿಯಿಂದ 20 ಮೆ.ವ್ಯಾ. ಸಾಮರ್ಥ್ಯ ಸೌರ ವಿದ್ಯುತ್ ಯೋಜನೆಯನ್ನು ಹಾಸನ ಜಿಲ್ಲೆಯ ದುದ್ದಾ ಗ್ರಾಮದಲ್ಲಿ ಸ್ಥಾಪಿಸಲು ಭಾಗವಹಿಸಲಾಗಿತ್ತು. ಆದರೆ ಟೆಂಡರ್ ಸ್ಪರ್ಧೆಯಲ್ಲಿ ಹಂಚಿಕೆಯಾಗಿರುವುದಿಲ್ಲ.

ಮುಂದುವರೆದು, 2018 ಸಾಲಿನ ಕ್ರೆಡಲ್ ಅವರ 650 ಮೆ.ವ್ಯಾ. ಸಾಮರ್ಥ್ಯ ಸೌರ ವಿದ್ಯುತ್ ಯೋಜನೆಯನ್ನು ಪಾವಗಡ ಸೋಲಾರ್ ಪಾರ್ಕನಲ್ಲಿ ಸ್ಥಾಪಿಸುವ ಟೆಂಡರನಲ್ಲಿ ಮತ್ತು ಇನ್ನಿತರ ಕೇಂದ್ರ ಸರ್ಕಾರದ ಟೆಂಡರನಲ್ಲಿ ಭಾಗವಹಿಸಲು, ನಿಗಮಕ್ಕೆ ತಗಲುವ ಉತ್ಪಾದನಾ ವೆಚ್ಚವು ಖಾಸಗಿ ಕಂಪನಿಗಳ ಪೈಪೋಟಿಯಿಂದ ಟೆಂಡರ್ ಸ್ಪರ್ಧೆಯಲ್ಲಿ ಹಂಚಿಕೆಯಾಗಲು ಸಾಧ್ಯವಾಗುತ್ತಿಲ್ಲ.

**2) ಪವನ ವಿದ್ಯುತ್ ಯೋಜನೆ:**

ಗದಗ ಜಿಲ್ಲೆಯ ಕಪ್ಪತಗುಡ್ಡ ಪ್ರದೇಶದಲ್ಲಿ ಸುಮಾರು 52.25 ಮೆ.ವ್ಯಾ. ಸಾಮರ್ಥ್ಯದ ಪವನ ಶಕ್ತಿಯ ವಿದ್ಯುತ್ ಉತ್ಪಾದನೆ ಮಾಡಲು ಸರ್ಕಾರದ ಆದೇಶ ಸಂ. ಇಎನ್ 162 ಎನ್‌ಸಿಇ 2015 ದಿ. 24.08.2015 ರಂತೆ ಆದೇಶ ಪಡೆಯಲಾಗಿತ್ತು.

ಈ ಯೋಜನೆಯನ್ನು ಅನುಷ್ಠಾನಗೊಳಿಸಲು ನಿಗಮದಿಂದ ಗದಗ ಜಿಲ್ಲೆಯ ಕಪ್ಪತಗುಡ್ಡ ಪ್ರದೇಶದಲ್ಲಿ ಸುಮಾರು 65.50ಹೆಕ್ಟೇರ್ ಜಾಗವನ್ನು ಗುರುತಿಸಲಾಗಿತ್ತು. ಈ ಜಾಗವು ಸಂರಕ್ಷಿತ ಮೀಸಲು ಅರಣ್ಯ ಎಂದು ಘೋಷಿಸಿರುವ ಕಾರಣ ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಯಿಂದ ಅನುಮತಿ ದೊರೆತಿರುವುದಿಲ್ಲ. ಆದಕಾರಣ ಈ ಯೋಜನೆಯನ್ನು ಕೈಬಿಡಲಾಗಿದೆ.

**3) ಕಲ್ಲಿದ್ದಲು ಶೇಖರಣೆ ಮತ್ತು ಮರು ಹಂಚಿಕೆ ನಿರ್ವಹಣೆ**

ಕರ್ನಾಟಕ ವಿದ್ಯುತ್ ನಿಗಮವು ತನ್ನ ಅಧೀನದಲ್ಲಿರುವ ಶಾಖೋತ್ಪನ್ನ ವಿದ್ಯುತ್ ಕೇಂದ್ರಗಳ ಕಲ್ಲಿದ್ದಲಿನ ಬೇಡಿಕೆಯನ್ನು ಪೂರೈಸಲು ಈ ಕೆಳಕಂಡಂತೆ ಇಂಧನ/ಕಲ್ಲಿದ್ದಲು ಪೂರೈಕೆ ಒಪ್ಪಂದಗಳನ್ನು ಮಾಡಿಕೊಂಡಿರುತ್ತದೆ:

| ವಿದ್ಯುತ್ ಕೇಂದ್ರ | ಕಲ್ಲಿದ್ದಲು ಕಂಪನಿ | ವಾರ್ಷಿಕ ಪ್ರಮಾಣ (ಲಕ್ಷ ಟನ್‌ಗಳಲ್ಲಿ) |
|---|---|---|
| ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರ | ಎಸ್.ಸಿ.ಸಿ.ಎಲ್. | 30.10 |
| | ಡಬ್ಲ್ಯೂಸಿ.ಎಲ್. | 51.21 |
| ಒಟ್ಟು | | **81.31** |
| ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರ | ಎಸ್.ಸಿ.ಸಿ.ಎಲ್. | 22.94 |
| | ಬಾರಂಜ್ ಗಣಿಗಳು | 25.00 |
| ಒಟ್ಟು | | **47.94** |

...2

| | | |
|---|---|---|
| ಯರಮರಸ್ ಶಾಖೋತ್ಪನ್ನ ವಿದ್ಯುತ್ ಕೇಂದ್ರ | ಎಸ್.ಸಿ.ಸಿ.ಎಲ್. | 52.36 |

2021-22 ನೇ ಸಾಲಿನಲ್ಲಿ ಪಡೆಯಲಾಗಿರುವ ಕಲ್ಲಿದ್ದಲಿನ ಪ್ರಮಾಣ:

| ವಿದ್ಯುತ್ ಕೇಂದ್ರ | ಕಲ್ಲಿದ್ದಲು ಕಂಪನಿ | ಪೂರೈಕೆ ಪ್ರಮಾಣ (ಲಕ್ಷ ಟನ್‌ಗಳಲ್ಲಿ) (28.02.2022 ರವರೆಗೆ) |
|---|---|---|
| ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರ | ಎಸ್.ಸಿ.ಸಿ.ಎಲ್. | 17.00 |
| | ಡಬ್ಲ್ಯೂ.ಸಿ.ಎಲ್. | 22.53 |
| | ಎಂ.ಸಿ.ಎಲ್. | 4.10 |
| **ಒಟ್ಟು** | | **43.63** |
| ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರ | ಎಸ್.ಸಿ.ಸಿ.ಎಲ್. | 28.57 |
| | ಬಾರಂಜ್ ಗಣಿಗಳು | 10.06 |
| **ಒಟ್ಟು** | | **38.63** |
| ಯರಮರಸ್ ಶಾಖೋತ್ಪನ್ನ ವಿದ್ಯುತ್ ಕೇಂದ್ರ | ಎಸ್.ಸಿ.ಸಿ.ಎಲ್. | 28.60 |

2021-22 ನೇ ಸಾಲಿನ ಪ್ರಾರಂಭದ ಕೆಲವು ತಿಂಗಳುಗಳಲ್ಲಿ ರಾಜ್ಯ ವಿದ್ಯುತ್ ಜಾಲಕ್ಕೆ ಶಾಖೋತ್ಪನ್ನ ವಿದ್ಯುತ್ ಕೇಂದ್ರಗಳಿಂದ ವಿದ್ಯುತ್ ಬೇಡಿಕೆ ಕಡಿಮೆಯಿದ್ದ ಕಾರಣ ಹಾಗೂ ವಿದ್ಯುತ್ ಕೇಂದ್ರಗಳಲ್ಲಿ ಸಾಕಷ್ಟು ಪ್ರಮಾಣದ ಕಲ್ಲಿದ್ದಲಿನ ದಾಸ್ತಾನು ಲಭ್ಯವಿದ್ದ ಕಾರಣ, ನಿಗಮವು ಕಲ್ಲಿದ್ದಲು ಕಂಪನಿಗಳಿಂದ ಕಲ್ಲಿದ್ದಲು ಪಡೆಯುವುದನ್ನು ನಿಯಂತ್ರಿಸುತ್ತಿತ್ತು. ಕ್ರಮೇಣ, ಆಗಸ್ಟ್-2021 ರ ನಂತರ ರಾಜ್ಯದ ವಿದ್ಯುತ್ ಜಾಲದಿಂದ ಬೇಡಿಕೆ ಹೆಚ್ಚಾದುದರಿಂದ, ಲಭ್ಯವಿದ್ದ ಕಲ್ಲಿದ್ದಲಿನ ದಾಸ್ತಾನನ್ನು ಸಂಪೂರ್ಣವಾಗಿ ಬಳಸಿಕೊಳ್ಳಲಾಗಿರುತ್ತದೆ. ಈ ಮಧ್ಯೆ, ನಿರಂತರ ಮಳೆ ಮತ್ತು ಇತರೇ ಕಾರಣಗಳಿಂದ ಕಲ್ಲಿದ್ದಲು ಕೇಂದ್ರಗಳಿಂದ ನಿಗಮದ ವಿದ್ಯುತ್ ಕೇಂದ್ರಗಳಿಗೆ ಪೂರೈಕೆಯಾಗುತ್ತಿದ್ದ ಕಲ್ಲಿದ್ದಲಿನ ಪ್ರಮಾಣ ಕಡಿಮೆಯಾಗಿರುತ್ತದೆ.

ಕೇಂದ್ರ ಕಲ್ಲಿದ್ದಲು ಮಂತ್ರಾಲಯದ, ಸಬ್-ಗ್ರೂಪ್ ಕಮಿಟಿಯು, ನಿಗಮದ ವಿದ್ಯುತ್ ಕೇಂದ್ರಗಳಲ್ಲಿನ ಕಡಿಮೆ ದಾಸ್ತಾನನ್ನು ಮನಗಂಡು, ಡಬ್ಲ್ಯೂ.ಸಿ.ಎಲ್. & ಎಂ.ಸಿ.ಎಲ್. ಗಳಿಂದ ಕಲ್ಲಿದ್ದಲನ್ನು ಪಡೆಯುವಂತೆ ನಿರ್ದೇಶಿಸಿರುತ್ತದೆ. ಅದರಂತೆ, ನಿಗಮವು, ಡಬ್ಲ್ಯೂ.ಸಿ.ಎಲ್. ರಸ್ತೆ-ರೈಲು (RCR) ಮಾರ್ಗದಲ್ಲಿ & ಎಂ.ಸಿ.ಎಲ್.ನಿಂದ ರೈಲು (ARR) ಮಾರ್ಗದ ಮೂಲಕ ಹೆಚ್ಚುವರಿ ಕಲ್ಲಿದ್ದಲನ್ನು ಪಡೆಯುತ್ತಿದೆ.

ಮುಂದುವರೆದು, ಎಂ.ಸಿ.ಎಲ್.ನಿಂದ ರೈಲು-ಸಮುದ್ರ-ರೈಲು (RSR) & ರಸ್ತೆ-ರೈಲು (RCR) ಮಾರ್ಗಗಳ ಮೂಲಕ ಕಲ್ಲಿದ್ದಲನ್ನು ಪಡೆಯಲು ಏಜೆನ್ಸಿಗಳನ್ನು ನೇಮಿಸಲಾಗಿದ್ದು ಸದರಿ ಮಾರ್ಗದ ಮೂಲಕ ಕಲ್ಲಿದ್ದಲನ್ನು ಪಡೆಯುವ ಕಾರ್ಯ ಸಧ್ಯದಲ್ಲೇ ಪ್ರಾರಂಭವಾಗಲಿದೆ.
ಇವುಗಳ ಜೊತೆಗೆ, ನಿಗದಿತ ಪ್ರಮಾಣದಲ್ಲಿ ಕಲ್ಲಿದ್ದಲನ್ನು ಪೂರೈಸುವಂತೆ ಕಲ್ಲಿದ್ದಲು ಕಂಪನಿಗಳನ್ನು ನಿಯಮಿತವಾಗಿ ಕೋರಲಾಗುತ್ತಿದೆ.

2021 ರ ದ್ವಿತೀಯಾರ್ಧದಲ್ಲಿ ಕಲ್ಲಿದ್ದಲಿನ ದಾಸ್ತಾನು ಕಡಿಮೆಯಾದ ಸಂದರ್ಭದಲ್ಲಿ, ಮಾನ್ಯ ಮುಖ್ಯಮಂತ್ರಿಗಳು ಕರ್ನಾಟಕ ಸರ್ಕಾರ, ಮಾನ್ಯ ಇಂಧನ ಸಚಿವರು, ಕರ್ನಾಟಕ ಸರ್ಕಾರ, ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ಅಪರ ಮುಖ್ಯ ಕಾರ್ಯದರ್ಶಿಗಳು, ಇಂಧನ ಇಲಾಖೆ

...3

ಕರ್ನಾಟಕ ಸರ್ಕಾರ ಹಾಗೂ ವ್ಯವಸ್ಥಾಪಕ ನಿರ್ದೇಶಕರು ಕ.ವಿ.ನಿ.ನಿ ರವರುಗಳು ಸಹ ಭಾರತ ಸರ್ಕಾರದ ವಿವಿಧ ಮಂತ್ರಾಲಯಗಳೊಡನೆ ನಿರಂತರ ಸಂಪರ್ಕ ಸಾಧಿಸುವ ಮೂಲಕ ರಾಜ್ಯದ ವಿದ್ಯುತ್ ಕೇಂದ್ರಗಳಗೆ ಹೆಚ್ಚುವರಿ ಕಲ್ಲಿದ್ದಲು ಮತ್ತು ಹೆಚ್ಚುವರಿ ರೇಕ್‌ಗಳನ್ನು ಪಡೆಯುವಲ್ಲಿ ಯಶಸ್ವಿಯಾಗಿರುತ್ತಾರೆ.

ಮುಂದಿನ ದಿನಗಳಲ್ಲಿ ಹೆಚ್ಚಾಗಲಿರುವ ವಿದ್ಯುತ್ ಬೇಡಿಕೆಯನ್ನು ನಿಭಾಯಿಸಲು ನಿಗಮವು ಈಗಾಗಲೇ ಕಲ್ಲಿದ್ದಲು ಕಂಪನಿಗಳೊಂದಿಗೆ ನಿರಂತರ ಸಂಪರ್ಕ ಸಾಧಿಸಿದ್ದು, ನಿಗಧಿತ ಪ್ರಮಾಣದ ಕಲ್ಲಿದ್ದಲಿನ ಪ್ರಮಾಣವನ್ನು ಪಡೆಯುವಲ್ಲಿ ಎಲ್ಲಾ ಪ್ರಯತ್ನಗಳನ್ನು ಮಾಡಲಾಗುತ್ತಿದೆ.